01

## ಪೌರತ್ವ ತಿದ್ದುಪಡಿ ಮಸೂದೆ - ಏನಿದು?

ಪಾಕಿಸ್ತಾನ, ಅಫ್ಘಾನಿಸ್ತಾನ್, ಹಾಗು ಬಾಂಗ್ಲಾದೇಶ ಗಳ ಕೇವಲ ಆರು ಧಾರ್ಮಿಕ ಅಲ್ಪಸಂಖ್ಯಾತ ಸಮುದಾಯಗಳಿಗೆ ಪೌರತ್ವ ಪಡೆಯಲು ಅನುಮತಿ ಕೊಡುತ್ತದೆ.

02

## ಸಮಸ್ಯೆಗಳು

ಧರ್ಮದ ಮೂಲಕ ಪೌರತ್ವವನ್ನು ಪಡೆದುಕೊಳ್ಳುವ ಸೌಲಭ್ಯದಿಂದ ಮುಸ್ಲಿಮರನ್ನು ಹೊರಗಿಡಲಾಗಿದೆ. ಇದಲ್ಲದೆ ಕೇವಲ ಮೂರು ದೇಶದವರ ಅಕ್ರಮ ವಲಸಿಗರಿಗೆ ಪೌರತ್ವವನ್ನು ನೀಡಲು ಪರಿಗಣಿಸುತ್ತದೆ. ಇದರಿಂದ ಶ್ರೀಲಂಕಾ, ಮಯನ್ಮಾರ್ ಹಾಗು ನೇಪಾಳ ದೇಶದವರನ್ನು ಹೊರತುಪಡಿಸಲಾಗಿದೆ ಹಾಗೂ ಈ ದೇಶಗಳ ಧಾರ್ಮಿಕ ಅಲ್ಪಸಂಖ್ಯಾತರನ್ನು ಈ ಪಟ್ಟಿಯಿಂದ ಹೊರತುಪಡಿಸಲಾಗಿದೆ.

03

## ಇದು ಏಕೆ ಸಮಸ್ಯೆಯಾಗಿದೆ

ನಮ್ಮ ಸಂವಿಧಾನವು ಭಾರತವನ್ನು ಜಾತ್ಯತೀತ ದೇಶ ಎಂದು ಘೋಷಿಸಿದೆ. ಇದರರ್ಥ ಕೇವಲ ಧರ್ಮದ ಆಧಾರದ ಮೇಲೆ ವ್ಯಕ್ತಿಗಳ ನಡುವೆ ಯಾವುದೇ ರೀತಿಯ ಭೇದ-ಭಾವ ಮಾಡಬಾರದು. ಆದ್ದರಿಂದ ಈ ಕಾಯ್ದೆಯು ನೆರೆಯ ದೇಶದಲ್ಲಿ ಹಿಂಸೆಗೆ ಒಳಪಟ್ಟ ಮುಸ್ಲಿಮರನ್ನು, ಭಾರತದ ಪೌರತ್ವವನ್ನು ಕೊಡುವುದರಿಂದ ಹೊರತುಪಡಿಸಿ, ನಮ್ಮ ದೇಶದ ಜಾತ್ಯತೀತತೆಯ ಸ್ವರೂಪವನ್ನು ಸ್ಪಷ್ಟವಾಗಿ ಉಲ್ಲಂಘಿಸುತ್ತದೆ.

04

## ಪ್ರಾದೇಶಿಕ ನಿರ್ಬಂಧಗಳು

ಈ ಕಾಯ್ದೆಯು ಕೇವಲ ಪಾಕಿಸ್ತಾನ, ಅಫ್ಘಾನಿಸ್ಥಾನ್ ಹಾಗು ಬಾಂಗ್ಲಾದೇಶದ ಧಾರ್ಮಿಕ ಅಲ್ಪಸಂಖ್ಯಾತರಿಗೆ ಸೀಮಿತಪಟ್ಟಿಸಿರುವುದಕ್ಕೆ ಯಾವುದೇ ತರ್ಕಬದ್ಧ ಆಧಾರಗಳನ್ನು ನೀಡುವುದಿಲ್ಲ. ಈ ಕಾಯ್ದೆಯು ನೆರೆಯ ದೇಶಗಳಲ್ಲಿ ಹಿಂಸೆಗೊಳಗಾದ ಧಾರ್ಮಿಕ ಅಲ್ಪಸಂಖ್ಯಾತರನ್ನು ರಕ್ಷಿಸುವ ಗುರಿಯನ್ನು ಹೊಂದಿದೆ. ಹಾಗಾದರೆ ಕಿರುಕುಳಕ್ಕೆ ಒಳಪಟ್ಟಿರುವ ಶ್ರೀಲಂಕಾ ತಮಿಳರು, ಮಾಯನ್ಮಾರಿನ ರೋಹಿಂಗ್ಯರು, ನೇಪಾಳಿ ಗೋರ್ಖಾಗಳು, ಉಯ್ಘುರ್ ಮತ್ತು ಅಹ್ಮದೀಯರ ಗತಿ ಏನು? ತಿದ್ದುಪಡಿಯು ಇದನ್ನು ಪರಿಗಣಿಸುವುದಿಲ್ಲ.

05

## ರಾಷ್ಟ್ರೀಯ ಪೌರತ್ವ ನೋಂದಣಿ ಎಂದರೇನು ?

ರಾಷ್ಟ್ರೀಯ ಪೌರತ್ವ ನೋಂದಣಿ ಎಂಬುವುದು ಮೊದಲು ಅಸ್ಸಾಂನಲ್ಲಿ ಜಾರಿಗೆ ತರಲಾಗಿತ್ತು. ಜನರು ಭಾರತದ ಪೌರತ್ವಕ್ಕೆ (Citizenship) ಅರ್ಹರಾಗಲು, ತಮ್ಮ ಭಾರತದ ಮೂಲತ್ವದ ದಾಖಲೆಗಳನ್ನು ಸಲ್ಲಿಸಬೇಕು. ದಾಖಲಾತಿಗಳು ಇಲ್ಲವಾದರೆ ಇದು, ಕಾನೂನುಬದ್ಧ ನಾಗರಿಕರನ್ನು ಭಾರತದ ಪೌರತ್ವದಿಂದ ಹೊರಗಿಡುತ್ತದೆ. ಈಗಾಗಲೇ, ಅಸ್ಸಾಂನಲ್ಲಿ, ೧೯ ಲಕ್ಷ ಅರ್ಜಿದಾರರನ್ನು ಹೊರತುಪಡಿಸಲಾಗಿದೆ.

06

## NRC ಹಾಗು CAA

ಓರ್ವ ಭಾರತೀಯ ನಾಗರಿಕನು, NRC ಯಲ್ಲಿ ಒಂದುವೇಳೆ ಹೊರತುಪಡಿಸಿದ್ದರೆ, ಅವರು ಮುಸಲ್ಮಾನೇತರನಾದರೆ, CAA ಯಲ್ಲಿ, ಪೌರತ್ವವನ್ನು ಪಡೆಯಬಹುದು. ಇನ್ನು ಅವರು ಮುಸಲ್ಮಾನರಾದರೆ, CAA ಅವರನ್ನು ಅಕ್ರಮ ವಲಸಿಗರೆಂದು ಭಾರತದ ಪೌರತ್ವದಿಂದ ಹೊರತುಪಡಿಸುತ್ತದೆ.